ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ರಾಜ್ಯದ ಎಲ್ಲಾ ಕೇಂದ್ರಗಳಲ್ಲಿ ಸಮರ್ಪಕ ಕ್ರೀಡಾ ಉತ್ತೇಜನ ಸಂಸ್ಥೆಗಳನ್ನು ಸ್ಥಾಪಿಸುವ ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

246 (342) ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಎಲ್ಲಾ ಕೇಂದ್ರಗಳಲ್ಲಿ ಒಲಂಪಿಕ್ಸ್ ಅಸೋಸಿಯೇಷನ್, ಅಥ್ಲೆಟಿಕ್ ಫೆಡರೇಷನ್‌ನಂತಹ ಸಮರ್ಪಕ ಕ್ರೀಡಾ ಉತ್ತೇಜನ ಸಂಸ್ಥೆಗಳನ್ನು ಸ್ಥಾಪಿಸುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ;

(ಆ) ಉದಯೋನ್ಮುಖ ಕ್ರೀಡಾಪಟುಗಳನ್ನು ಗುರುತಿಸಿ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ವಾರ್ಷಿಕ ಪ್ರೋತ್ಸಾಹ ಧನ, ಸಹಾಯ ಧನ ನೀಡುವ ಬಗ್ಗೆ ಸರ್ಕಾರದ ನಿಲುವೇನು ; ಯಾವ ಹೊಸ ಯೋಜನೆಗಳನ್ನು ಸರ್ಕಾರ ಹಮ್ಮಿಕೊಂಡಿದೆ ;

(ಇ) ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳ ಕ್ರೀಡಾಂಗಣ ನಿರ್ವಹಣೆಯ ಸದ್ಯದ ಸ್ಥಿತಿಗತಿಗಳೇನು ; ಈವರೆಗೆ ಇದರ ನಿರ್ವಹಣೆಗೆ ವ್ಯಯವಾದ ಒಟ್ಟು ಹಣವೆಷ್ಟು ; (ವಿವರ ನೀಡುವುದು)

(ಈ) ರಾಜ್ಯದ ಬೇರೆ ಬೇರೆ ಭಾಗಗಲ್ಲಿ ಅಥ್ಲೆಟಿಕ್ ತರಬೇತುದಾರರ ಕೊರತೆ ಕಂಡುಬಂದಿದೆಯೇ ; ಕೊರೆತೆಯಿದ್ದಲ್ಲಿ ಮರು ನೇಮಕಾತಿಗೆ ಕ್ರಮ ಕೈಗೊಳ್ಳಲಾಗಿದೆಯೇ ; (ವಿವರ ನೀಡುವುದು)

(ಉ) ರಾಷ್ಟ್ರದಲ್ಲೇ ಪ್ರಸಿದ್ಧಿ ಪಡೆಯುತ್ತಿರುವ ಗ್ರಾಮೀಣ ಕ್ರೀಡೆ ಕಬಡ್ಡಿ ಅಭಿವೃದ್ಧಿಗೆ ಪ್ರತ್ಯೇಕ ಕ್ರೀಡಾ ಕೇಂದ್ರ ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೇ ? (ಮಾಹಿತಿ ನೀಡುವುದು)